‘ ನಡೆವರೆಡಹದೆ ಕುಳಿತರೆಡಹುವರೆ ’

—ಕವಿ ರಾಘವಾಂಕ

ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ
ಬಲ್ಲಿದರು ಇದ್ದು – ಬಲವಿಲ್ಲ ಸಾಹಿತ್ಯ
ವೆಲ್ಲರಿಗಿಲ್ಲ ಸರ್ವಜ್ಞ

ಸಿರಿಗನ್ನಡಂ ಗೆಲ್ಗೆ

ವಿಕ್ರಮ ಸಂವತ್ಸರ ಕಾರ್ತೀಕ
ಶುದ್ಧ ಪೂರ್ಣಿಮಾ ಗುರುವಾರ

೧೯೪೦ನೆಯ ಇಸವಿ
೧೪ನೆಯ ನವೆಂಬರ್

# ಸು ಹೃ ದ ಯ

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ
ತದಹಂ ಭಕ್ತ್ಯುಪಹೃತ ಮಶ್ನಾಮಿ ಪ್ರಯತಾತ್ಮನಃ ||

**—ಶ್ರೀಕೃಷ್ಣವಾಣಿ**

ತುರೀಯವನ ಸಂಭೂತಂ ನಾನಾಗುಣ ಸಮನ್ವಿತಂ
ಆನಂದ ಸೌರಭಂ ಪುಷ್ಪಂ ಗೃಹ್ಯತಾಮಿದಮುತ್ತಮಂ ||

**ದವನ** ಬಕುಲ ಚಂಪಕ **ಸು**ಪಾಟಲಾಬ್ಜೈಃ
ಪುನ್ನಾಗ ಜಾಜಿ ಕರವೀರ ರಸಾಲಪುಷ್ಪೈಃ
**ಬಿ**ಲ್ವಪ್ರವಾಲ ತುಲಸೀದಲ ಮಾಲಿಕಾಭಿಃ
ತ್ವಾಂ ಪೂಜಯಾಮಿ **ಭುವನೇಶ್ವರೀ** ಮೇ ಪ್ರಸೀದ ||

**—ಆಗಮೋಕ್ತ**

# ನೆನಪಿನ ಮುಡುಪು

ಮೈಸೂರು

ಮಹಾರಾಜಾ ಕಾಲೇಜಿನಲ್ಲಿ

ಕನ್ನಡ ವಿದ್ವನ್ಮಣಿಗಳಾಗಿದ್ದು

ದಿವಂಗತರಾದ ನನ್ನ ನಲ್ಮೆಯ ಪ್ರೊಫೆಸರ್

ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., ಅವರ

ಸವಿನೆನಪಿಗಾಗಿ ಈ ನವದವನ ಮಾಲೆಯನ್ನು

ಶಾರದಾಂಬೆಯ ಪಾದ ಸನ್ನಿಧಿಯಲ್ಲಿ

ಅತ್ಯಂತ ಭಕ್ತಿಪೂರ್ವಕವಾಗಿ

ಅರ್ಪಿಸಲಾಗಿದೆ.

# ಅ ರ್ಪ ಣೆ

ದವನದಲ್ಲಿ ಪರಿಮಳವುಂಟು ; ಅಂದವಿಲ್ಲ ; ರಾಜೋದ್ಯಾನದಲ್ಲಿ ಬೆಳೆದ ಪರಿಪರಿಯ ಕುಸುಮಗಳ ವೈಖರಿಯಿಲ್ಲ ; ಶ್ರೀಮಂತರ, ವಿಲಾಸಿಗಳ ಉಪವನದ ಮನಮೋಹಕ ಪುಷ್ಪಗಳ ಚೆಲುವಿಲ್ಲ ; ಇದು ಬೆಳೆಯುವುದು ಬಡವನ ಕೈತೋಟದಲ್ಲಿ. ಇಷ್ಟರ ಮೇಲೆ, ದವನವನ್ನು ಪೋಣಿಸಿ, ಮುದ್ದಾದ ಮಾಲೆಯನ್ನು ಕಟ್ಟುವ ಜಾಣ್ಮೆಯೂ ನನಗಿಲ್ಲ. ನಾನು ಬೆಳೆದದ್ದು ಎಂಬುದು ಒಂದೇ ಅಭಿಮಾನ ! ಎಲ್ಲ ಮುತ್ತೈದೆಯರ ಮುಡಿಯಲ್ಲಿಯೂ ಶೋಭಿಸುವು ದೆಂಬುದೇ ಒಂದು ಹೆಮ್ಮೆ ! ಬಾಳೆಯ ಹಣ್ಣಿನ ಜೊತೆಯಲ್ಲಿ ಸೇರಿಕೊಂಡು ಇದು ತೇರಿನಲ್ಲಿರುವ ದೇವರ ಮೂರ್ತಿಗೆ ತಾಗುವುದೇ ಒಂದು ಭಾಗ್ಯ ! ಈ ನವ ದಳಗಳನ್ನು ಕನ್ನಡ ವಿದ್ವನ್ಮಣಿಗಳಾದ ಪ್ರೊ|| ವೆಂಕಣ್ಣಯ್ಯನವರ ಸವಿ ನೆನಪಿನಲ್ಲಿ ಬೆಳೆಯಿಸಿರುವುದೇ ಇವುಗಳಲ್ಲಿರುವ ಪ್ರೀತಿ ಪರಿಮಳ ! ಈ ಕಿರಿಯ ಕಾಣಿಕೆಯನ್ನು ಅವರ ಸವಿ ನೆನಪಿಗಾಗಿ ಶಾರದಾಂಬೆಯ ಪಾದಸನ್ನಿಧಿಯಲ್ಲಿ ಅರ್ಪಿಸಿರುವುದೇ ಇವುಗಳಿಗಿರುವ ಅಂದ ! ಒಂದು ಬಿಲ್ವಪತ್ರೆಯನ್ನು, ತುಲಸೀದಳವನ್ನು ಭಕ್ತಿಯಿಂದ ದೇವರಿಗೆ ಅರ್ಪಿಸುವ ಭಕ್ತನ ಮನೋಭಾವವೇ ಈ ನವ ದವನವನ್ನು – ಹೊಸ ಕುಡಿಗಳನ್ನು ಪೋಣಿಸಿರುವ ಭಕ್ತಿ ತಂತು ! ಈ ನವ ದವನ ಮಾಲೆಯೇ ನನ್ನ ಪಾಲಿನ ಒಂದು ಮಂದಾರ ಮಾಲೆ ! ನಾನು ಕಟ್ಟಿರುವ ಕವನ ಕುಸುಮ ಮಾಲೆಗಳಲ್ಲಿ ಇದೇ ಮೊದಲನೆಯದು. ಹಿರಿಯರು ಇದ್ದುದನ್ನೇ ಮೆಚ್ಚಿ ಮನ್ನಿಸಲಿ ! ಕಿರಿಯರು ಪ್ರೋತ್ಸಾಹಿಸಲಿ ! ಅದೇ ನನ್ನ ಭಾಗ್ಯ !

—ಶ್ರೀಶೈಲಂ

# ಎರಡನೆಯ ಮುದ್ರಣ

———

ನನ್ನ ಕನ್ನಡ ಕೈತೋಟದಲ್ಲಿ ಮತ್ತೊಮ್ಮೆ ದವನ ಬೆಳೆಯಲು
ಅವಕಾಶವಾದುದು ನನ್ನ ಪುಣ್ಯ.

**—ಶ್ರೀಶೈಲಂ.**

ಪಾರ್ಥಿವ ಸಂವತ್ಸರ ಕಾರ್ತೀಕ
ಶುದ್ಧ ಪೂರ್ಣಿಮಾ ಸೋಮವಾರ

೧೯೪೫ನೆಯ ಇಸವಿ
೧೯ನೆಯ ನವೆಂಬರ್.

**ಓ. ಎಲ್. ಲಿಂಗಣ್ಣಯ್ಯ, ಬಿ.ಎ., (ಆನರ್ಸ್)**
ನಂ. ೨೦೬
ಚಿಕ್ಕಣ್ಣನ ತೋಟ
ಶಂಕರಪುರಂ, ಬಸವನಗುಡಿ ಅಂಚೆ
ಬೆಂಗಳೂರು.

# ಕ ವ ನ ಮಾ ಲೆ

# ೧. ಮಧುವನ

ಚಾಮುಂಡಿಗಿರಿಯ ತಪ್ಪಲಲಿ ಮೈಸೂರು ಪುರ—
ನಂಜನಗುಡಿಯ ರಾಜಮಾರ್ಗದಲಿ
ರಂಜಿಪುದು ತಾರುಣ್ಯ ತುಂಬಿರುವ ಕನ್ನೆವೊಲು
ಮೈಸೂರಿನುದ್ಯಾನ ಮಧುವನವು ೧

ರಂಗುರಂಗಿನ ಹೂಗಳಾಭರಣ ಒಪ್ಪಿರಲು
ಕಂಗಳನು ಮೋಹಿಸುವ ಹಸುರುಡುಗೆಯ
ಸಿಂಗರಿಸಿ ನಿಂತಿರುವ ಅಂಗನೆಯ ತೆರದಲ್ಲಿ
ಕಾಂಬುವುದು ಸೊಗವಡೆದ ಮಧುವನವು ೨

ಕುಲವನಿತೆ ಸೂಸುತಿಹ ಎಳೆನಗೆಯ ರೀತಿಯಲಿ
ಅರಳಿರಲು ಕೊಳದಲ್ಲಿ ತಾವರೆಗಳು
ಬಂಡುಂಡು ಝೇಂಕರಿಪ ಮರಿದುಂಬಿ ತಂಡಗಳು
ಹಾಡುವುವು ಮಧುರ ಸಂಗೀತಗಳನು ೩

ತಂಗಾಳಿ ಸುಳಿಯುತಿರೆ ತನಿಗಂಪು ಬೀರುತಿರೆ
ಗಿಳಿವಿಂಡು ತನಿರಸವ ನೀಂಟುವುವು—
ಹಾರುವುವು ಬಿಳಿಮುಗಿಲ ತೆರೆತೆರೆಯ ಜೊತೆಯಲ್ಲಿ
ಪಚ್ಚೆತೆನೆಗಳ ಸಾಲು ತೋರಣದಂತೆ ೪

ಹೂಬಿಟ್ಟು ಬಳುಕುತಿಹ ಬಳ್ಳಿಮಾಲೆಯಲ್ಲಲ್ಲಿ
ತೂಗುವುವು ಮಾಮರದ ಕೊಂಬೆಯಲ್ಲಿ
ಚೆಲುವು ಕಂಗಳ ನವಿಲು ಕುಣಿಯುತಿರೆ ಸಂತಸದಿ
ಕೋಗಿಲೆಯು ಹಾಡುವುದು ಸವಿದನಿಯಲಿ ೫

ದನಿಯೆತ್ತಿ ಕೂಗುತಿಹ ಹಕ್ಕಿಗಳ ಕಲರವದ
ಮಾರ್ದನಿಯು ಸೆಲೆಯುತಿರೆ ಮಧುವನದಲಿ
ಆಡುವುವು ಅರಸಂಚೆ ತಿಳಿನೀರ ಕೊಳದಲ್ಲಿ
ತಾವರೆಯ ಬನದಲ್ಲಿ ಅನುದಿನವು ೬

ಪರಿಪರಿಯ ಹೂಗಳನು ಮುಡಿದಿರುವ ಬನದೇವಿ
ಕೋಗಿಲೆಯ ಗಾನವನು ಉಲಿಯುತಿಹಳು
ಮಧುಪಗಳ ಝೇಂಕಾರ ಕಾಲಖುಳಿ ಘಲ್ಲೆನಲು
ಮಲ್ಲಿಕಾರತಿಮಾಲೆ ಬೆಳಗುತಿಹಳು ೭

ಅಚ್ಚಹಸುರಿನ ಹಾಸಿನಲಿ ಅಂಚು ಬರೆದಂತೆ
ಕಂಗೊಳಿಸೆ ಬಣ್ಣಬಣ್ಣದ ಹೂಗಳು
ಕಾಂಬುವುದು ಮಧುವನವು ವನಲಕ್ಷ್ಮಿ ಸಿಂಗರಿಪ
ಮಧುರಾಜನರಮನೆಯ ಸೆಜ್ಜೆಯಂತೆ ೮

ಹಬ್ಬಿರುವ ಬಳ್ಳಿಯಲಿ ರಚಿಸಿರುವ ನವಿಲು ಹುಲಿ
ಗಂಡಭೇರುಂಡ ಸಿಂಹ ಶರಭಗಳು
ಕಾಣುವುವು ವೈಹಾರ ಕೇಳಿಯಲಿ ನಲಿವಂತೆ
ಜಾತಿ ವೈರವಬಿಟ್ಟು ಬಾಳುವಂತೆ ೯

ನಿಂಬ ಕುರುವಕ ಜಂಬು ನೇರಿಳೆ ಹಲಸು ಬೇವು
ರಸಾಲ ಸುರಹೊನ್ನೆ ತಮಾಲ ಕೌಂಗು
ದಾಳಿಂಬೆ ಬಾಳೆ ಸಂಪಿಗೆ ಬೇಲ ಚಕ್ಕೋತ
ತೆಂಗು ಮಾದಳ ವೃಕ್ಷ ಬೆಳೆದಿರುವುವು ೧೦

ಮಧುಮಾಸ ಬಂದಿರಲು ವನದೇವಿ ಸುಖಿಸುವಳು
ಮೃದು ತಳಿರ ಶಯ್ಯೆಯಲಿ ಮಧುವನದಲಿ
ಮೈಮರೆತು ನಿದ್ರಿಪಳು ಕೋಗಿಲೆಯ ಗಾನದಲಿ
ಮಂದ ಮಾರುತ ಬೀಸೆ ಚಾಮರವನು ೧೧

ಗ್ರೀಷ್ಮಋತು ಬಂದಿರಲು ಕುಳ್ಳಿಹಳು ಮಧುಲಕ್ಷ್ಮಿ
ತಂಪೀವ ಹೊಂಗೆಯಾ ನೆರಳಿನಲ್ಲಿ
ತಣ್ಣೆಲರು ಬೀಸುತಿರೆ ಎಳನೀರ ನೀಂಟುವಳು
ಜಲಕೇಳಿಯಾಡುವಳು ಮಧುವನದಲಿ ೧೨

ವರ್ಷಋತು ಸಮನಿಸಲು ಕಾರ್ಮುಗಿಲ ಗರ್ಭದಲಿ
ಸೆಳೆಮಿಂಚು ಹೊಳೆಯುತಿರೆ ನೋಡುತಿಹಳು
ಬನಲಕುಮಿ ಗರಿಗೆದರಿ ಕುಣಿಯುತಿಹ ಕೊರಲೆತ್ತಿ
ಕೇಕೆಹಾಕುತಿಹ ನವಿಲು ಬಳಗವನು ೧೩

ಮಳೆಮುಗಿಲ ಮಾಲೆಯನು ಧರಿಸಿರಲು ಚಾಮುಂಡಿ
ಕಾಳ ಮಹಿಷನ ಸದೆವ ವಿರೂಪದಲಿ
ವನಲಕ್ಷ್ಮಿ ನಡುಗುತಿಹ ತೆರದಲ್ಲಿ ಕಾಂಬುವಳು
ಮಳೆಗಾಳಿ ಬೀಸುತಿರೆ ಮಧುವನದಲಿ ೧೪

ಶರದೃತು ಕಾಲಿಡಲು ಕೆರೆಕಟ್ಟೆ ತುಂಬಿರಲು
ವನಲಕ್ಷ್ಮಿ ನಲಿಯುವಳು ಕೌಮುದಿಯಲಿ
ರಾಜ್ಯಲಕ್ಷ್ಮಿಯ ಹರಸಿ ಕಳುಹುವಳು ಜಯವೆಂದು
ಚತುರಂಗ ಬಲದಿ ವಿಜಯದಶಮಿಯಲಿ ೧೫

ಹೇಮಂತ ಋತುಬರಲು ಚಳಿಗಾಳಬೀಸುತಿರೆ
ಕಾರಂಜಿ ನೀರೆಲ್ಲ ಕೊರೆಯುತಿರಲು
ಬನದೇವಿ ಕೋಗಿಲೆಯ ಗಾನವನು ಮರೆಯುವಳು
ಹಿಮಮುಸುಕ ಹಾಕುವಳು ಮಧುವನದಲಿ ೧೬

ಶಿಶಿರಋತು ತಲೆದೋರೆ ಬನದೇವಿ ಅನುವರಿತು
ತರುಗಣದ ಸಿಂಗರವ ಮಾಡುತಿಹಳು
ಮಧುರಾಜ ಬರುವುದನು ಸಡಗರದಿ ಕಾಯುವಳು
ಹೊಸ ಕಳೆಯ ಬೀರುತ್ತ ಮಧುವನದಲಿ ೧೭

ಮಧುವನದ ಸೌಂದರ್ಯ ಜಲಧಿಯಲಿ ವನಲಕ್ಷ್ಮಿ
ಯೋಲಾಡಿ ಮನದಣಿಯೆ ನಲಿಯುತಿರಲು
ಸಮರಾತ್ರಿ ಸಮನಿಸಲು ಕಾಂಬುವಳು ಋಷಿಯಂತೆ;
ಯೋಗನಿದ್ರೆಯ ತಳೆದ ಯೋಗಿಯಂತೆ! ೧೮



## ೨. ಯಾರು ಬಲ್ಲರು ?

ಬಾಲಚಂದ್ರನು ಮೂಡಿ ನಗುತಿರಲು ಗಗನದಲಿ
ಕರಿಮುಗಿಲ ತೆರೆಯವನ ಮರೆಗೊಳಿಪುದು.
ಕೋಗಿಲೆಯು ಬನದಲ್ಲಿ ಉಲಿಯುತಿರೆ ನಲಿಯುತಿರೆ
ಗ್ರೀಷ್ಮರಾಜನು ಅಂದು ಕಾಲಿಡುವನು. ೧

ಯೌವನದ ಹೊನಲು ಹೊರಹೊಮ್ಮುತಿರೆಮುಖದಲ್ಲಿ
ಜೀವನದ ಸಂಪದವು ಹೆಚ್ಚುತಿರಲು
ನಿಜಪತಿಯ ಸೇರುತ್ತ ನಿತ್ಯಸುಖದಲಿ ಬೆರೆತ
ಚೆಲುವೆಯನು ನುಂಗುವುದು ಮುಪ್ಪು ಕೊನೆಗೆ. ೨

ಹಚ್ಚನೆಯ ಹುಲ್ಲಿನಲಿ ಮಂಜು ಮಣಿಗಳು ಹೊಳೆದು
ಭೂರಮೆಯು ನಗುವಂತೆ ತೋರುತಿರಲು
ಎಳೆಬಿಸಿಲು ನಗಿಸುತ್ತ ನಗಿಸುತ್ತ ಅಂತ್ಯದಲಿ
ಹೀರುವುದು ಮೆರೆಯುವಾ ಸೌಂದರವನು. ೩

ಚಿಗುರಿ ನಲಿಯುವ ಬನದ ಸಿರಿಯೆಲ್ಲ ; ನೆರೆತುಂಬಿ
ಹರಿಯುತಿಹ ಹೊನಲೆಲ್ಲ ಕುಗ್ಗುತ್ತ
ತಗ್ಗುತ್ತ ಸಾರುವುವು ಜಗವು ಅಸ್ಥಿರವೆಂದು—
ಯಾರು ಕೇಳುವರು ಈ ವೇದಾಂತವ ? ೪

ಜಗವು ಅಸ್ಥಿರ ! ನಾವು ಅಸ್ಥಿರವು ! ಬಿಡುವೆವೇ
ಜೀವನದ ಹೋರಾಟ, ಬರಿಬಾಳಿನ
ಬಯಲಾಟಗಳನು ! ಇದು ಬಿಡಿಸಲಾರದ ತೊಡಕು
ಮಾಯವೋ ಮೋಹವೋ ಯಾರು ಬಲ್ಲರು ! ೫

# ೩. ಬಯಲಾಸೆ

ಬಿರುಗಾಳಿ ಬೀಸುತಿರೆ ಸಾಗರದ ವೀಚಿಗಳ
ಏರಿಳಿತದಂತೆನ್ನ ಮನಶ್ಶರಧಿ
ಯಲೆದ್ದೆದ್ದು ಬೀಳುತಿವೆ ಬಹುರಭಸದಾಶಾ
ತರಂಗಗಳು ಕ್ಷಣಕ್ಷಣಕೆ ದೇವ ! ೧

ಹಿರಿತನವು ಬೇಕೆಂಬ ದೂರದಾಶಾವೀಚಿ
ಯೊಮ್ಮೆ ಬಂದು ಸೋಕುವುದು ಹೃದಯವನು
ಸಿರಿಯುರಸ ನಾನಾಗಬೇಕೆಂಬ ಬಯಲಾಸೆ
ತೆರೆಬಂದು ಮುಸುಕುವುದು ಮೇಲಿಂದಲಿ. ೨

ಮಾನ್ಯತೆಯ ಶಿಖರಾಗ್ರದಲಿ ಮೆರೆಯಬೇಕೆಂಬ
ಹಿರಿಯಾಸೆ ಗಣ್ಯತೆಯ ತೂಗುಮಂಚ
ದಲಿ ನಲಿಯಬೇಕೆಂಬ ಮನದಾಸೆ ಜತೆ ಸೇರಿ
ಬರುತಿಹವು ಒಮ್ಮೊಮ್ಮೆ ! ಸರ್ವೇಶನೆ ! ೩

ಹಿರಿತನವು ಸಿರಿತನವು ಮಾನ್ಯತೆಯು ಗಣ್ಯತೆಯು
ಜೀವನದ ಬಾಹ್ಯಾವಸ್ಥೆಗಳು ದೇವ !
ನೋಡಿದರೆ ನಿಜಸುಖದ ಆಗರಗಳಲ್ಲಲ್ಲ ! !
ತೋರುತಿಹ ಹಗಲುಗನಸುಗಳು ದೇವ ! ೪

ಹೃದಯದೌರ್ಬಲ್ಯವನು ಕಿತ್ತೆಸೆದು, ತುಂಬೆನಗೆ
ನೀತಿ-ಧೈರ್ಯವನು ; ಶಾಂತತೆಯ ಕೊಟ್ಟು
ಕವಿತಾವಿನೋದವನು ನೀಡಿ ‘ ಎಲೆಮರೆಯ ಕಾ
ಯಂತೆ ’ ಜೀವನವನನುಗೊಳಿಸು ದೇವಾ ! ೫

“ ಗಾಳಿಗೊಡ್ಡಿದ ಸೊಡರಿನಂದದಲಿ ” ಚಂಚಲವು
ಭೋಗ ಭಾಗ್ಯಗಳೆಲ್ಲ ! ಆತ್ಮೋನ್ನತಿ
ಮಾರ್ಗವನು ತೋರುತ್ತ ಶಾಂತತೆಯ ಬೀಜವನು
ಬಿತ್ತೆನ್ನ ಹೃದಯದಲಿ ದೇವೇಶ ! ೬



## ೪. ಸಾಹಿತ್ಯೋದ್ಯಾನ

೧

ನೋಡಿಲ್ಲಿ ಕನ್ನಡದ ಸಾಹಿತ್ಯದುದ್ಯಾನ
ಸೊಂಪಾಗಿ ಬೆಳೆದಿಹುದು ಹತ್ತಾರು ಶತಮಾನ !
ಕವಿಕೃಷೀವಲರಿಲ್ಲಿ ಬೆಳೆದಿಹರು ಬಹುಕಾಲ
ಕಾವ್ಯತರುಗಣ ಕವನಲತೆ ಕುಂಜಗಳ ಜಾಲ
ಕನ್ನಡದ ನುಡಿ ಧೀರರಾಜರಾಶ್ರಯದಲ್ಲಿ
ಉನ್ನತಿಯ ಪಡೆದಿಹುದು ಉದ್ಯಾನ ಜಗದಲ್ಲಿ !
ಕಳೆಹುಟ್ಟಿ ಬೆಳೆದಿರಲು ಉದ್ಯಾನವನದಲ್ಲಿ
ವ್ಯಾಕರಣ ಕುಂಟೆಯನು ಹೊಡಿದರು ಕಳೆಯಲ್ಲಿ
ಛಂದಸ್ಸು ಹಲುಬೆಯನು ಹೊಡೆದಿಹರು ಹೊಲದಲ್ಲಿ
ಕಳೆಗಿಂತ ಬೆಳೆಮುಂದೆ ಹುಲುಸಾಯ್ತು ಎಲ್ಲೆಲ್ಲು !
ನೃಪತುಂಗ ಚಕ್ರೇಶ ಮಾಡಿದನು ದಾರಿಯನು
ಮುಂದೆ ಬರುವರಿಗೊಂದು ‘ ಕವಿರಾಜಮಾರ್ಗ ’ವನು

೨

ಅಲ್ಲಿಂದ ಕಾವ್ಯಸಸಿ ಹಾಲ್ತುಂಬಿ ಹುಲುಸಾಯ್ತು
ಜೈನಕವಿಗಣ ಸೇರಿ ಕೈನೀರ ನೆರೆದಾಯ್ತು
ಪಂಪರನ್ನರ ಪೊನ್ನಜನ್ನರ ಕೃಷಿಯನಾಡು
ಸೊಂಪು ಕಾವ್ಯದ ಬೆಳೆಗೆ ಇಂಬಾಯ್ತು ಈ ಬೀಡು
ಸಂಸ್ಕೃತದ ಪುಣ್ಯತರವಾಹಿನಿಯ ಹರಿಸಿದರು
ಸಾಹಿತ್ಯದುದ್ಯಾನ ತರುಲತೆಗೆ ; ಬರಿಸಿದರು
ರಾಜರಾಜರನು ಘನದೇವದೇವರನಲ್ಲಿ
ವನಕೇಳಿ ಜಲಕೇಳಿಯಾಡೆ ಸಾಹಿತ್ಯದಲ್ಲಿ !
ಪಾಮರರು ನಿಂತಾಯ್ತು ಮುಳ್ಳುಬೇಲಿಯ ಹಿಂದೆ
ಬಿಗುಮಾನ ಬಲವಾಯು ಬಡಜನರ ಕಣ್ಮುಂದೆ !

೩

ಮುಂದೆ ಬಂದರು ವೀರಶೈವ ಕವಿಕೃಷೀವಲರು
ಹಂಪೆ ಹರಿಹರ ರಾಘವಾಂಕಾದಿ ಬುಧಜನರು
ಬೆಳೆಸಿದರು ಚಿರಭಕ್ತಿ ಕಾವ್ಯತರುಗಳನಿಲ್ಲಿ
ರಚಿಸಿದರು ನೀತಿಮಾರ್ಗವನು ಸಾಹಿತ್ಯದಲ್ಲಿ.
ಬಸವಣ್ಣ ಮಹದೇವಿ ಜಸವೆತ್ತ ಅಲ್ಲಮರು
ಲಾವಣ್ಯತರ 'ವಚನ' ಲತೆಗಳನು ಬೆಳೆಸಿದರು.
ಸಾಂಗತ್ಯ ಚೌಪದಿ ತ್ರಿಪದಿ ವರಷಟ್ಪದಿಯು
ಎಂದೆಂಬ ಕಾವ್ಯ ಸಸ್ಯಗಳಿಗಾಯ್ತು ಪಾತಿಯು.

೪

ವೀರನಾರಣ ರುದ್ರಭಟ್ಟಾರ್ಯ ಲಕ್ಷ್ಮೀಶ
ಕವಿಕೃಷೀವಲರಿಲ್ಲಿ ಪಡೆದ ಕವಿತಾವೇಶ
ಮೂಡಿಹುದು ಧೃವಕಾವ್ಯತರುವೃಂದ ರೂಪದಲಿ
ತಣಿಸುತ್ತ ರಸಿಕರನು ಕಾವ್ಯರಸಪಾನದಲಿ.
ಕನಕ ವಿಟ್ಟಲ ವ್ಯಾಸ ವರದಾಸಗಣವಿಲ್ಲಿ
ಭಕ್ತಿಲತೆಯನು ನೆಟ್ಟಿಹರು ತಣಿದು ಮನದಲ್ಲಿ.

೫

ಅಂದಿನಿಂ ಎಂದೆಂದು ಕನ್ನಡದ ರಾಜಗಣ
ಮಾಡಿಹುದು ಕನ್ನಡದ ಉದ್ಯಾನಕಾವರಣ.
ರಾಷ್ಟ್ರಕೂಟರು ಧೀರಚಾಲುಕ್ಯ ಹೊಯ್ಸಳರು
ವಿಜಯನಗರ ಸಾಮ್ರಾಜ್ಯ ಧುರಧೀರ ಭೂಪಾಲರು
ಮೈಸೂರು ಯದುವಂಶ ಮಹರಾಜ ಪುಂಗವರು
ಮನವಿಟ್ಟು ಮಾಡಿಹರು ಈ ನುಡಿಯ ಶೃಂಗಾರ.
ಕನ್ನಡದ ಉದ್ಯಾನ ವರ್ಧಿಸಲಿ ಇಳೆಯಲ್ಲಿ
ಕಾವ್ಯತರು ಕವನಲತೆ ಎಂದೆಂದು ಬೆಳೆದಿಲ್ಲಿ.

---

## ೫. ಹಂಬಲು

ದೇಗುಲದಿ ನಿನ್ನ ಶಿಲೆಯಮೂರುತಿಯ ಮುಂದೆ
ಬಾರಿಸುವ ಜೇಗಟೆಯದನಿಗೆ ದೇವ !
ಮರೆತು ನಿದ್ದೆಯಮಾಡುತಿಹ ಎನ್ನ ಹೃದಯವಲಿ
ಅರಿವಿಲ್ಲ ! ಎಚ್ಚರಿಸು ಪರಮಾತ್ಮನೆ ! ೧

ಕಂದದಯೆ ಕುಂದದೆಯೆ ನಿನ್ನ ಬಿಂಬದ ಮುಂದೆ
ನಿಂದು ಉರಿಯುತಿಹ ನಂದಾದೀಪವು
ಹರಿಸಲಾರದೆನ್ನೆದೆಯಲಿಹ ಗಾಢಾಂಧತೆಯ
ತೋರು ನೀಂ ಜ್ಞಾನಜೋತಿಯನು ದೇವ ! ೨

ಹೊಳೆಯುತಿಹ ನಿನ್ನ ವಿಗ್ರಹದ ಮುಂಗಡೆಯಲ್ಲಿ
ಬೆಳಗುತಿಹ ಕಪ್ಪುರಾರತಿಯು ಮತ್ತೆ
ಘಮಘಮಿಪ ಧೂಪಧೂಮದ ಕಂಪು ಎನ್ನೆದೆಯ
ಕಲುಷಿತವ ಹರಿಸಲಳವಲ್ಲ ದೇವ ! ೩

ಪಂಡಿತರು ಘೋಷಿಸುವ ವೇದಮಂತ್ರಗಳೆಲ್ಲ
ಮಂದಮತಿಯಾದೆನಗೆ ನಿಲುಕಲಾರ
ವೆಂದೆನ್ನೆದೆಯ ಒಳದನಿಯು ನುಡಿಯುತಿದೆ ದೇವ !
ಮನದ ಬಂಧನ ಹರಿಸು ಗುರುದೇವನೆ ! ೪

ಬಾರಿಸುವ ಜೇಗಟೆಯು ಉರಿವ ನಂದಾದೀಪ
ಬೆಳಗುತಿಹ ಕಪ್ಪುರಾರತಿಯು ಮತ್ತೆ
ಧೂಪಧೂಮದ ಕಂಪು ಪಂಡಿತರ ಮಂತ್ರಗಳು
ಬರಿಯ ಬಯಲಾಟದಂತಿಹವು ದೇವ !

ತಿಳಿನೀರಕೊಳದ ಮೇಗಡೆಯಲ್ಲಿ ಮುಸುಕಿರುವ
ಶೈಲೂಷವನು ಕಲ್ಲೆಸೆದು ಹರಿಸು
ವಂತೆನ್ನ ಹೃದಯ ಕಾಸಾರ ಕಲುಷಿತವ ಹರಿ
ಸಲಾರದು ನಾನೆಸಗುತಿಹ ಕರ್ಮವು ೬

ಕರ್ಮವೆಂತೆಸಗಿದರು ಫಲವೇನು ? ಗುರುದೇವ !
ಮರ್ಮವರಿಯದೆ ತೊಳಲುವೆನೆಲ್ಲೆಲ್ಲು !
ಜ್ಞಾನದಾಹದಿ ಬಳಲಿರುವ ಎನಗೆ ನಿಜತತ್ವ
ಪೀಯೂಷಪಾನವನು ನೀಡು ದೇವ ! ೭

ಕಾನನದ ಮಧ್ಯದಲಿ ಕಾರಿರುಳ ಕೊನೆಯಲ್ಲಿ
ಅರಳುತಿಹ ಸುಮದಂತೆ ಅರಳಿಸೆನ್ನ
ಒಣಗಣ್ಣ ಹೂವನ್ನು ಕಾರುಣ್ಯ ಮೂರುತಿಯೆ !
ಬಗೆಹರಿಸು ಮನದ ತೊಡಕನ್ನು ದೇವ ! ೮

## ೬. ಯಾವುದು ಚೆಂದ?

ಗಿರಿತರುಗಳೆಡೆಯಲ್ಲಿ ತಿಳಿಗೊಳದ ಕೆಲದಲ್ಲಿ
ಮೆಲ್ಲಮೆಲ್ಲನೆ ಸುಳಿದು ಸಾರಿಬರುವ
ಮಂದಮಾರುತ ನಗಿಪ ಬಿರಿಮುಗುಳ ಮಲ್ಲಿಗೆಯು
ಮೈಸಿರಿಯ ತನಿಗಂಪು ಬಹಳ ಚೆಂದ ೧

ಬಡತನದ ಬಾಳಿರಲಿ ರೋಗರುಜಿನಗಳಿರಲಿ
ಮನದ ಕೋಟಲೆಗಳೆಷ್ಟೆಷ್ಟೆ ಇರಲಿ
ಅರಳು ಮಲ್ಲಿಗೆಯ ಸಮ ಕರುಳು ಕಂದನನು
ತಾಯಿ ಎದೆಗಪ್ಪಿ ನಲಿಯುವುದು ಚೆಂದ ೨

ಹಸರು ಪೈರಿನ ಮೇಲೆ ಬೀಳುತಿರೆ ಕಡೆ ಬಿಸಿಲು
ಗರಿಗೆದರಿ ಕುಣಿಯುತ್ತ ಕಂಠವೆತ್ತಿ
ಕೇಕೆ ಹಾಕುವ ನವಿಲ ಕಡು ಚೆಲುವ ತಾ ಕಂಡು
ಮೈಮರೆವ ರಸಿಕನಾನಂದ ಚೆಂದ ೩

ತುಂಬಿ ಹರಿಯುವ ನದಿಯ ತೀರದಲಿ ಕುಳ್ಳಿರ್ದು
ಕೋಗಿಲೆಯ ಗಾನದಲಿ ಮೈಯಮರೆತು
ತನ್ನ ಮುಂದಿನ ಬದುಕುಗಳ ಬಗೆಗಣ್ಣಿನಿಂ
ನೋಡಿ ಮನದಲ್ಲಿ ಬರೆವುದತಿ ಚೆಂದ ೪

## ೭. ವಿದ್ಯಾರಣ್ಯ

ಪರಶಿವನು ವರತಪವನೆಸಗಿದನು ವನದಲ್ಲಿ
ಗಿರಿಕನ್ಯೆ ಪಾರ್ವತಿಯ ಶುಶ್ರೂಷೆಯಲ್ಲಿ !
ಚಿರಕಾಲ ಸಾಗದೆಯೆ ಮನಸೋತ ವನಿತೆಯಲಿ
ಜಗವ ಮುಳುಗಿಸಿದ ಬೆಂಕಿ ಬೇಗುದಿಯಲ್ಲಿ ೧

ಯತಿಯೆ ! ವಿದ್ಯಾರಣ್ಯ ! ಕುಳಿತಿರುವೆ ತಪದಲ್ಲಿ
ತರುಣಿಮಣಿ ತುಂಗಭದ್ರೆಯ ಸೇವೆಯಲ್ಲಿ !
ಮನವಿನಿತು ಚಲಿಸದೆಯೆ ವರಯೋಗ ಮೌನದಲಿ
ಸಾಧಿಸಲು ಮುಕ್ತಿಯನು ಸ್ವಾತಂತ್ರ್ಯದಲ್ಲಿ ೨

ತುಂಗಭದ್ರೆಯ ತೆರೆಯ ಮಂಜುಳದ ನಾದದಲಿ
ಗಿಳಿವಿಂಡಿನಾ ಚಿಲಿಮಿಲಿಯ ಮೆಲ್ಲುಲಿಯಲಿ
ಕೋಗಿಲೆಯ ಕಲಕಂಠ ಮಧುರತರ ಗಾನದಲಿ
ವೈರಾಗ್ಯ ಸಾಧನೆಯ ಹಿಡಿದೆ ಯೋಗದಲ್ಲಿ ೩

ನದಿಯ ಕಲರವ ನಿನ್ನ ಜಪಮಾಲೆ ಮಂತ್ರಗಳು
ಅರಗಿಣಿಯ ಸವಿನುಡಿಯೆ ವೇದಘೋಷಗಳು
ಕೋಗಿಲೆಯ ಸವಿಗಾನ ಮೊರೆಯುತಿಹ ಓಂಕಾರ
ಸಂನ್ಯಾಸಿ ನಿನ್ನ ಮನವೇ ನಿರ್ವಿಕಾರ ! ೪

ಹಿಂದಲ್ಲಿ ಪರಶಿವನು ತಪಗೆಟ್ಟ ಕತದಿಂದ
ಬಂದಿಹನೊ ! ವಿದ್ಯಾರಣ್ಯ ರೂಪದಲಿಂದು !
ತಪಗೆಯ್ದು ಪರಿಪೂರ್ಣ ಸಿದ್ಧಿಯನು ಪಡೆಯಲೆಂದು
ಕರ್ಣಾಟದೇಕೀಕರಣವೇ ಗುರಿಯೆಂದು. ೫

ಪಂಪಾಸರಸಿನಲಿ ಈಜುತಿರುವಾ ಕಲಹಂಸ
ಪದಗತಿಯ ವೈಖರಿಯ ನರಿಯೆ ಪರಮಹಂಸ !
ನಿನ್ನ ವೈರಾಗ್ಯ ಗುರಿಯೇನೊ ! ಯತಿರಾಜಹಂಸ !
ರಾಜಯೋಗವ ಹಿಡಿದೆ ಯತಿಕುಲೋತ್ತಂಸ ! ೬

ಹುಕ್ಕ ಬುಕ್ಕರ ಹೂಡಿದೆಯ ರಾಜ್ಯರಥದಲ್ಲಿ !
ಸಂನ್ಯಾಸಿ ಸಾರಥಿಯು ನೀನೆ ಜಗದಲ್ಲಿ !
ಒಕ್ಕಲಿಕ್ಕಿದೆ ಧರ್ಮದ್ರೋಹಿಗಳ ಛಲದಲ್ಲಿ
ಕನ್ನಡದ ಸಾಮ್ರಾಜ್ಯ ದೇವಿಯಡಿಯಲ್ಲಿ ೭

ರಾಜಯೋಗವು ಭಕ್ತಿಯೋಗವು ಕರ್ಮಯೋಗವು
ಕೂಡಿದಾ ಬ್ರಹ್ಮತೇಜೋಮೂರ್ತಿ ನಮಿಪೆ !
ಹರಸು ಕನ್ನಡನಾಡಿನೇಳ್ಗೆಯನು ಯತಿವರನೆ !
ಶಿರಬಾಗಿ ನಮಿಸುವೆನು ವೈರಾಗ್ಯಮೂರ್ತಿಯೇ ! ೮

---

# ೮. ಬಾಷ್ಪಾಂಜಲಿ

## (ದುಃಖಗೀತೆ) †

೧

ಜಗವು ಮುಳುಗಿಹುದಿಂದು ಕಡುದುಃಖಜಲಧಿಯಲಿ
ಕಾರ್ಮುಗಿಲು ಕವಿದಿಹುದು ಕಾರಿರುಳು ಮುಸುಕಿಹುದು.
ಗುಮ್ಮನಂದದಿ ಕ್ರೂರವಿಧಿ ಬಂದು ನಂದಿಸಿತು
ಮೈಸೂರು ನಾಡಿನಲಿ ದಿವ್ಯತರ ಜ್ಯೋತಿಯನು
ಕರ್ಣಾಟದೇವಿ ಭುವನೇಶ್ವರಿಯು ದುಃಖಿಪಳು
ಕರವಾಲ ಕೆಳಗಿಟ್ಟು ಮುಕುಟವನು ನೆಲಕಿಟ್ಟು
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

೨

ಹತ್ತು ವರ್ಷದ ಹಸುಳೆ ಹಾಲುಗಲ್ಲದ ಕೂಸು
ಚಾಮರಾಜೇಂದ್ರ ತಂದೆ ಕಣ್ಮುಚ್ಚಿದಂದು
ಅಪರಂಜಿ ನಾಲ್ವಡಿಯ ಕೃಷ್ಣೇಂದ್ರ ಭೂಪರನು
ತೂಗಿ ತೊಟ್ಟಿಲೊಳಿಟ್ಟು ಜೋಗುಳವ ನುಡಿದವರು
ಕೈಹಿಡಿದು ನಡೆಗಲಿಸಿ ನುಡಿಗಲಿಸಿ ನಲಿದವರು
ಹಾಲೂಡಿ ಹಣೆಯಲ್ಲಿ ತಿಲಕವನು ಇಟ್ಟವರು
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

† ಆಳಿದ ಮಹಾಸ್ವಾಮಿಯವರಾದ ಶ್ರೀಮನ್ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರ ಪವಿತ್ರಾತ್ಮಕ್ಕೆ ಚಿರಶಾಂತಿಯನ್ನು ಬಯಸಿ ಹಾಡಿದ ಚರಮಗೀತೆ.

೩

ಸುಖಿಯಾಗು ನೀನೆಂದು ಹರಸಿದ್ದ ಗುರುಜನರು
ಚಿರಕಾಲ ಬಾಳೆಂದು ನುಡಿಸಿದ್ದ ಹಿರಿಜನರು
ಶುಭವೆಂದು ಅಕ್ಷತೆಯ ಹಾಕಿದ್ದ ಬಂಧುಗಳು
ಒಡನಾಡಿ ಒಡನೋದಿ ಒಡವಳೆದ ನೇಹಿಗರು
ಮನದಣಿಯೆ ಸೇವೆಯನು ಸಲಿಸಿದ್ದ ಸೇವಕರು
ಅನಧಾನವೆನ್ನುತ್ತ 'ನುಡಿದಿದ್ದ ಭಟಜನರು
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

೪

ಮಜ್ಜನದ ಮನೆಯಲ್ಲಿ ಶಿವಪೂಜೆ ಭವನದಲಿ
ವರ ಸಜ್ಜೆಗೃಹದಲ್ಲಿ ಹೊತ್ತರಿದು ಭಾವಿಪೊಡೆ
ಇದ್ದಂತೆ ಕಾಂಬುವಿರಿ ಅರಮನೆಯ ವಾಸದಲಿ
ಚಾಮುಂಡಿ ತಪ್ಪಲಲಿ ಹಯನೇರಿ ತಿರುಗುವರೊ
ಗಿರಿಯೇರಿ ನಡೆಯುವರೊ ಎಂಬಂತೆ ತೋರುವುದು
ಬೆಳಗಪ್ಪ ಜಾಮದಲಿ ಮೈಸೂರು ನಗರದಲಿ
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

೫

ನೀವುಂಡ ತಾಣದಲಿ ಚಿನ್ನದಾ ಹರಿವಾಣ
ನಿಮ್ಮ ಪದವಿಟ್ಟು ನಡೆದಿದ್ದ ರನ್ನಗಂಬಳಿ
ಪವಡಿಸಿದ ಮಣಿಮಂಚ ತೂಗಿದುಯ್ಯಾಲೆಮಣೆ
ಸಾರುತಿವೆ ಮೂಕಭಾವದಿ ರಾಜನಿಷ್ಠೆಯನು
ರನ್ನಗನ್ನಡಿ ತೋರುವುದು ರಾಜಬಿಂಬವನು
ನಿಲವುಗನ್ನಡಿ ಬಿಂಬಿಪುದು ರಾಜರೂಪವನು
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

೭

ಹಯಶಾಲೆ ಗಜಶಾಲೆ ಮುಳುಗಿಹವು ದುಃಖದಲಿ
ಪಟ್ಟಹಯ ಪಟ್ಟಗಜ ಕಣ್ಣೀರ ಮಿಡಿಯುವುವು
ಮೌನದಲಿ ಮರುಗುತ್ತ ಕಾದಿಹವು ಬರುತಿಹರು
ಅಟ್ಟಹಾಸದಿ ಪಟ್ಟಭದ್ರರೆಂದೆನ್ನುತ
ಬೆಳ್ಗೊಡೆಯ ಹಿಡಿದಿಹಳು ಪರರಾಜ್ಯ ಲಕ್ಷ್ಮಿ ತಾ
ಕಾದಿಹಳು ರತ್ನಸಿಂಹಾಸನದ ಕೆಲದಲ್ಲಿ
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

೭

ನಿಮ್ಮ ನಿರ್ಮಲ ಕೀರ್ತಿಯನು ಸಂದ ಮೂವತ್ತು
ಮೇಲೆಂಟು ವರ್ಷದಲಿ ಇಳೆಯೊಳಗೆ ಬೆಳಗಿಸಿದ
ಮೈಸೂರು ಬಾವುಟವು ತಾನಿಂದು ಅರೆವಿಳಿದು
ತಲೆವಾಗಿ ದುಃಖಿಪುದು ಮೌನದಲಿ, "ಕಾಯೌ
ಶ್ರೀಗೌರಿ" ಎಂದೆಂಬ ಗೀತೆಯನು ನುಡಿಸಿದ್ದ
ಓಲಗವು ಮೂಕವಾಗಿಹುದಿಂದು ಶೋಕದಲಿ
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ !
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

೮

ಹೂಬಿಟ್ಟು ನಿಂದಿಹುವು ಉದ್ಯಾನವನದಲ್ಲಿ
ಗಿಡಬಳ್ಳಿ ಕಾದಿಹುವು ಶಿವಪೂಜೆ ಸಮಯವನು
ದಿನದಂತೆ ಬಿಡಿಸಿಲ್ಲ ಹೂಗಳನು ಬಾಡುವುವು !
ತೊಟ್ಟಳಿದು ಬೀಳುವುವು ಗಿಡದಿಂದ ಹಣ್ಣುಗಳು
ತಲೆಗೊಡಹಿ ರೋದಿಪುವು ಜೀಯೆಂದು ತರುರಾಜಿ
ಅತಿದುಃಖ ಮಾರುತವು ಬೀಸುತಿರೆ ಮಧುವನದಿ
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

೯

ಪೋಷಿಸಲು ನಿಮ್ಮ ಸುಕುಮಾರ ದೇಹವನು
ಅನುದಿನವು ಹಾಲಿತ್ತ ಗೋಮಾತೆ ತುಂಬಿಹಳು
ಕೆಚ್ಚಲನು ಸೂಸಲಾರಳು ಹಾಲು ಧಾರೆಯನು !
ಅಗಲಿದಿರಿ ನೀವೆಂದು ಕಣ್ಣೀರ ಸುರಿಸುವಳು
ನಿಟ್ಟುಸಿರ ಬಿಡುತಿಹಳು ದಿಟ್ಟಿಸುತ ನೋಡುವಳು
ಮೂಕಭಾವದಿ ಮರುಗುವಳು ಕರೆವ ಹಟ್ಟಿಯಲಿ !
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

೧೦

ಎಲ್ಲ ದುಃಖವ ಮೀರಿರುವ ದುಃಖವೊಂದಿಹುದು
ಮಾರಾಣಿದೇವಿ ಪ್ರತಾಪಕುವರಿಯರ
ಸುಕುಮಾರ ಹೃದಯದಲಿ ಭುಗಿಲೆಂದು ಭುಗಿಲೆಂದು
ಹೊತ್ತುತಿಹ ದುಃಖಾಗ್ನಿ ದಹಿಸುತಿದೆ ದೇಹವನು !
ಯಾವ ಭೋಗವ ಯಾವ ಭಾಗ್ಯವನು ಮಹಮಾತೆ
ಮಡಿಲಲ್ಲಿ ತುಂಬಿದೊಡೆ ಶಮನಿಪುದು ದುಃಖಾಗ್ನಿ !
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ
ಪುಣಾತ್ಮ ಸತ್ಯಾತ್ಯ ದಿವ್ಯಾತ್ಮ ನಿಮ್ಮನ್ನು !

೧೧

ಪತಿದೇವರಡಿಯಲ್ಲಿ ತಪಗೈದು ನಾಲ್ವತ್ತು
ವರ್ಷಪರ್ಯಂತ ವ್ರತ ನೇಮ ಮಾಳ್ಕೆಯಲಿ ಪತಿ
ಸೇವೆ ಮಾಡಿಹರು ಮುತ್ತೈದೆ ಭಾಗ್ಯದಲಿ ! ಹಾ !
ಇನ್ನುಂಟಿ ಆ ಭಾಗ್ಯ ಸುರಭಾಗ್ಯ ಧರೆಯಲ್ಲಿ
ಎಪ್ಪತ್ತುಲಕ್ಷ ಮಕ್ಕಳಿರುವೆವು ಮಹತಾಯೆ !
ನಾವೇನ ಮಾಡುವೆವು ನಿರ್ಭಾಗ್ಯರಾಗಿಹೆವು
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

೧೨

ತಾಯ ಕಣ್ಣೀರ ತೊರೆಯ ಕೂಡಲಿ ನಮ್ಮೊಂದು
ಕಣ್ಣೀರ ಕಾಲುವೆಯು, ನಂದಿಸಲಿ ದುಃಖಾಗ್ನಿ
ಬೇಗೆಯನು ; ಮಾತಾಯಿ ! ನಿನ್ನೊಡಲ ದುಃಖವನು
ಶ್ರೀಗಂಧ ಚಿತೆಯಲ್ಲಿ ಕಪ್ಪುರದ ರಾಶಿಯನು
ಅಳವಡಿಸಿ ಅರ್ಪಣವ ಮಾಡಿದೆವು ರಾಜರ್ಷಿ
ಭೂಪರನು ವೈಶ್ವಾನರನ ದಿವ್ಯ ಕರತಲದಿ.
ಯಾರು ಮರೆವರು ನಾಲ್ವಡಿಯ ಕೃಷ್ಣಭೂಮಿಪರೆ
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

೧೩

ಸುರರು ಹೂಮಳೆ ಸುರಿಸಿ ನುಡಿಸಿದರು ದುಂದುಭಿಯ
ಜಯಮೆಂದು ಸಗ್ಗದಲಿ ನಿರ್ಜರರು ಘೋಷಿಪರು
ಚಿರಶಾಂತಿ ಮಂತ್ರವನು ಗೀರ್ವಾಣಭಾಷೆಯಲಿ
ನೀಡುವೆವು ಪ್ರಭುವರರೆ ಕಣ್ಣೀರು ಕಾಣಿಕೆಯ
ಅತಿದುಃಖ ತರ್ಪಣವ ಹತಭಾಗ್ಯರಾವಿಂದು
ನಾವೇನಮಾಡುವೆವು ನಿರ್ಭಾಗ್ಯರಾಗಿಹೆವು
ಮರೆಯಲಾರೆವು ನಾಲ್ವಡಿಯ ಕೃಷ್ಣಭೂಮಿಪರೆ
ಪುಣ್ಯಾತ್ಮ ಸತ್ಯಾತ್ಮ ದಿವ್ಯಾತ್ಮ ನಿಮ್ಮನ್ನು !

**ಶಾಂತಿ ವಚನ**

ಯದುವಂಶ ಕಲ್ಪಲತೆ ಪೂತು ಫಲಿಸಲಿ ನಿರುತ
ಸಂತಾನ ಫಲಗಳನು ಜಯಚಾಮ ರಾಜೇಂದ್ರ
ವರ್ಧಿಸಲಿ ಮುಂಬೆಳಗ ತೋರುತ್ತ ಕವಿದಿರುವ
ಕಾರ್ಮುಗಿಲ ಹರಿಸುತ್ತ ನಾಲ್ವಡಿಯ ಕೃಷ್ಣನೊಲು
ರಾಜರ್ಷಿಯೆನಿಸಿ ನೆರೆ ಪಾಲಿಸಲಿ ಮೈಸೂರು
ನಾಡನ್ನು ! ಚಿರಕಾಲ ವರ್ಧಿಸಲಿ ಧರೆಯಲ್ಲಿ !
ನಾಡೊಡೆಯ ಜಯಚಾಮರಾಜೇಂದ್ರ ; ವಂದಿಪೆವು
ಮೈಸೂರು ಕಣ್ಮಣಿಯೆ ಸುಖಿಯಾಗು ಸುಖಿಯಾಗು

# ಶು ಭಾ ಶಂ ಸ ನೆ

೧

ಯದುಕುಲಾಂಬುಧಿ ಚಂದ್ರ ವರಗುಣ
ಹೃದಯ ಕನ್ನಡ ನಾಡ ಕಣ್ಮಣಿ
ಸದಯ ಶ್ರೀಜಯಚಾಮರಾಜೇಂದ್ರ ಸುಖಿಸು ಜಗದಲಿ
ಸುದತಿ ಸತ್ಯಪ್ರೇಮದೇವಿಯ
ಮುದದಿ ವೆರಸುತ ರಾಜ್ಯಲಕ್ಷ್ಮಿಯ
ಹೃದಯ ಭೂಷಣನೆನಿಸಿ ಬಾಳ್ಗೆ ಧರೆಯ ಪಾಲಿಸುತ

೨

ವರದೆ ಶುಭಕಾವೇರಿ ಗೋದಾ
ವರಿಯು ವೇದಾವತಿ ಕಪಿಲೆಯರು
ಪರಮಪಾವನೆ ತುಂಗಭದ್ರೆಯು ಪಂಚ ಕನ್ಯೆಯರು
ಕರದಿ ಧರಿಸಿಹ ಪುಣ್ಯಜಲವನು
ಸುರಿಸುವರು ಮಕುಟಾಗ್ರದಲಿ ನೀ
ನರಸುತನಗ್ರೈಯ್ಯೆಂದು ಹರಸುವರು ಜನಪೋತ್ತಮನೆ

೩

ಯಾದವಾನ್ವಯ ಮಾತೆ ಗಿರಿಜೆಯು
ಮೋದದಿಂದಲಿ ಕಟ್ಟೆ ಪಟ್ಟವ
ಗಾದಿಯಲಿ ಕುಳ್ಳಿರಿಸಿ ಕರವಾಲವಿಡುತ ಕರದಲಿ
ಸಾದರದಿ ಶಿಖಿ ಮೊಹರ ನೀಡುತ
ಮೇದಿನೀಪತಿಯಾಗಿ ಧರೆಯಲಿ
ಮೇದಿನೀಶರ ಮೌಳಿಮಣಿಯಾಗೆಂದು ಹರಸುವಳು

೪

ಪುಣ್ಯಪುರುಷನೆ ! ನಿನ್ನ ಸಲಹಲಿ
ಪುಣ್ಯ ನದಿಗಳ ಪುಣ್ಯತೀರ್ಥದ
ಪುಣ್ಯರಾಶಿಯು ಪುಣ್ಯಪುರುಷರ ತಪದ ಫಲವೆಲ್ಲ
ಪುಣ್ಯವಧು ಸಚ್ಚರಿತೆ ಪುಣ್ಯಾ
ರಣ್ಯೆ ಸತ್ಯಪ್ರೇಮದೇವಿಯ
ಪುಣ್ಯವರ್ಧಿಸಿ ವಂಶಲತೆ ಪೂತು ಫಲಿಸಲಿಹದಲಿ

೫

ವೀರ ಯದುರಾಯರ ಕಲಿತನವ
ಧೀರ ರಾಜೊಡೆಯರಭಿಮಾನವ
ಶೂರ ಚಿಕದೇವಾಖ್ಯಭೂಪರ ದೈವಭಕ್ತಿಯ ಮೇಣ್
ಧೀರ ಮುಮ್ಮಡಿ ಕೃಷ್ಣ ಜನಪರ
ಶೂರರೆನಿಸಿದ ಚಾಮರಾಜರ
ಚಾರುತರ ಗುಣಗಣವ ಮೆರೆಸುತ ಸಲಹು ಲೋಕವನು

೬

"ರಾಜಋಷಿ'' ಯೆಂದೆನಿಸಿ ಬಾಳಿದ
ರಾಜ ನಾಲ್ವಡಿ ಕೃಷ್ಣಭೂಪರ
ತೇಜವನು ಬೀರುತ್ತ ರಕ್ಷಿಸು ನಾಡ ಪ್ರಜೆಗಳನು
ಸಾಜದಿಂದಲಿ ತಂದೆಯಂದದಿ
ರಾಜಗುಣಗಳ ಪಡೆದು ನೆರೆ ರಾ
ರಾಜಿಸೈ ನೀಂ ರತ್ನ ಸಿಂಹಾಸನದಿ ಮಂಡಿಸುತ

೭

ಪಟ್ಟಭದ್ರನೆ ಸುಖಿಸು ಸಂತತ
ಪಟ್ಟಮಹಿಷಿಯ ಸಹಿತ ಧರೆಯಲಿ
ಪಟ್ಟದಾನೆಯು ಪಟ್ಟದಶ್ವವು ನಿರುತ ವರ್ಧಿಸಲಿ
ಪಟ್ಟಮೆರೆಯಲಿ ಶಾಶ್ವತವೆನಿಸಿ
ನೆಟ್ಟಿರಲಿ ಯದುವಂಶ ಪೀಳಿಗೆ
ಯಟ್ಟಹಾಸದಿ ವರ್ಧಿಸಲಿ ರವಿಚಂದ್ರರಿರುವನಕ

೮

ವಿಜಯಿಸೈ ಜಯಚಾಮರಾಜನೆ
ವಿಜಯಿಸೈ ನವಕೋಮಲಾಂಗನೆ
ವಿಜಯಿಸೈ ಶುಭವನಿತೆ ಚಾರುಪುನೀತೆಯವೆರಸಿ ನೀಂ
ವಿಜಯಲಕ್ಷ್ಮಿಯ ಪೂರ್ಣ ಕೃಪೆಯಿಂ
ವಿಜಯಿಯಾಗೈ ಸುಜನರಂಜಕ
ವಿಜಯ ಲಕ್ಷ್ಮಾಂಬಿಕೆಯ ನಲವಿನ ಮುದ್ದುಸೋದರನೆ

೯

ಸುಖಿಸು ನೀಂ ಜಯಚಾಮ ರಾಜನೆ
ಸುಖಿಸು ನೀಂ ನರಸಿಂಹತನಯನೆ
ಸುಖಿಸು ಸತ್ಯಪ್ರೇಮಭಾಮೆಯ ವೆರಸಿ ಚಿರಕಾಲ
ಸುಖಿಸು ಕನ್ನಡನಾಡ ಕಣ್ಮಣಿ
ಸುಖಿಸು ಯದುಕುಲ ವೀರ ದಿನಮಣಿ
ಸುಖಿಸು ದೀನರ ಸಂತ ಬುಧ ಕವಿ ಜನರ ಪಾಲಿಸುತ

---

ಚಿರಮಭಿವರ್ಧತಾಂ ಯದುಸಂತಾನ ಶ್ರೀಃ



# ಅ ನು ಬಂ ಧ

## ದಿವಂಗತ ಪ್ರೊಫೆಸರ್ ವೆಂಕಣ್ಣಯ್ಯನವರ ಜೀವನ ಚರಿತ್ರೆ

*(ಸಂಗ್ರಹಿಸಿದ್ದು)

ದಿವಂಗತ ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರು ಹುಟ್ಟಿದ್ದು ಚಿತ್ರದುರ್ಗ ಡಿಸ್ಟ್ರಿಕ್ಟಿನ ಚಳ್ಳಕೆರೆ ತಾಲೂಕು ತಳಕು ಗ್ರಾಮದಲ್ಲಿ; ೧೮೯೧ನೆಯ ಇಸವಿ ಅಕ್ಟೋಬರ್ ಒಂದನೆಯ ತಾರೀಖಿನ ದಿನ. ಅವರ ತಂದೆಯ ಹೆಸರು ಸುಬ್ಬಣ್ಣನವರು. ತಾಯಿ ಲಕ್ಷ್ಮೀದೇವಮ್ಮನವರು. ವೆಂಕಣ್ಣಯ್ಯನವರ ಒಡಹುಟ್ಟಿದವರು ಎಲ್ಲಾ ಒಟ್ಟು ಹನ್ನೆರಡು ಜನ—ಏಳು ಜನ ಅಣ್ಣತಮ್ಮಂದಿರು, ಐದು ಜನ ಅಕ್ಕತಂಗಿಯರು. ವೆಂಕಣ್ಣಯ್ಯನವರೇ ಹಿರಿಯರು. ಅವರು ಲೋವರ್ ಸೆಕೆಂಡರಿ ಪರೀಕ್ಷೆಗೆ ಚಳ್ಳಕೆರೆಯಲ್ಲಿಯೂ, ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಚಿತ್ರದುರ್ಗದ ಹೈಸ್ಕೂಲಿನಲ್ಲಿಯೂ ಓದಿ ತೇರ್ಗಡೆ ಹೊಂದಿ ಎಫ್.ಎ. ಪರೀಕ್ಷೆಗೆ ಓದಲು ೧೯೦೯ರಲ್ಲಿ ಮೈಸೂರಿಗೆ ಬಂದರು. ಎಫ್.ಎ. ಪರೀಕ್ಷೆಗೆ ಅವರು ಒಂದು ವರ್ಷ ಬಳ್ಳಾರಿಯ ವಾರ್ಡ್ಲಾ ಕಾಲೇಜಿನಲ್ಲೂ ಓದುತ್ತಿದ್ದರು. ತರುವಾಯ ಅವರು ಮೈಸೂರಿನ ಮಹಾರಾಜಾ ಕಾಲೇಜಿಗೆ ಸೇರಿ ಚರಿತ್ರೆ ಅರ್ಥಶಾಸ್ತ್ರಗಳನ್ನು ತೆಗೆದುಕೊಂಡು ಬಿ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ಬೊಂಬಾಯಿಗೆ ಎಲ್‌ಎಲ್.ಬಿ. ಪರೀಕ್ಷೆಗೆ ಓದಲು ಹೋದರು. ಅವರು ಪ್ರೈವೇಟ್ ವ್ಯಾಸಂಗ ಮಾಡಿ ಎಂ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಅವರು ಎಲ್‌ಎಲ್.ಬಿ. ಪರೀಕ್ಷೆಗೆ ಓದುತ್ತಿದ್ದಾಗ ಬೊಂಬಾಯಿ ಪಟ್ಟಣದಲ್ಲಿ ಕೆಲವು ಕಾಲ ಜನರಲ್ ಪೋಸ್ಟ್ ಆಫೀಸಿನಲ್ಲಿ ಗುಮಾಸ್ತರಾಗಿದ್ದರು. ಅನಂತರ ಧಾರವಾಡ ಮಿಷನ್ ಹೈಸ್ಕೂಲಿನಲ್ಲಿಯೂ, ಬೆಂಗಳೂರು ದಂಡಿನಲ್ಲಿರುವ ಸೆಂಟ್ ಜೋಸೆಫ್ ಕಾಲೇಜಿನಲ್ಲಿಯೂ ಸಹಾಯೋಪಾಧ್ಯಾಯರಾಗಿ ಕೆಲಸಮಾಡುತ್ತಿದ್ದರು. ೧೯[illegible]ರಲ್ಲಿ ದೊಡ್ಡಬಳ್ಳಾಪುರದ ಕನ್ನಡ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದರು. ಇದೇ ಅವರಿಗೆ ದೊರಕಿದ ಸರ್ಕಾರದ ಮೊದಲ ನೌಕರಿ. ಅಲ್ಲಿಂದ ಮುಂದೆ ಬೆಂಗಳೂರಿನ ಇಂಗ್ಲೀಷ್ ಹೈಸ್ಕೂಲು ಸೆಂಟ್ರಲ್ ಕಾಲೇಜುಗಳಲ್ಲಿ ಮೇಲಕ್ಕೆ ಬಂದು ಮಹಾರಾಜಾ ಕಾಲೇಜಿನಲ್ಲಿ (೧೯೨೭) ಕನ್ನಡದ ಪ್ರೊಫೆಸರಾದರು.

---

* ಕೈ|| ಟಿ. ಎಸ್. ವೆಂಕಣ್ಣಯ್ಯನವರ ಪರಮ ಮಿತ್ರರೂ, ವಿದ್ವಾಂಸರೂ ಆದ ರಾಜಸೇವಾಸಕ್ತ ಪ್ರೊ|| ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಅವರೂ ಮತ್ತು ಕನ್ನಡದ ಪ್ರೊ|| ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ., ಅವರೂ ಬರೆದಿರುವ ಲೇಖನಗಳಿಂದ ಸಂಗ್ರಹಿಸಲಾಗಿದೆ. (ಪ್ರಬುದ್ಧ ಕರ್ಣಾಟಕ ಸಂಪುಟ ೨೦, ಸಂಚಿಕೆ ೪.)

ಶ್ರೀಮಾನ್ ವೆಂಕಣ್ಣಯ್ಯನವರಲ್ಲಿ ಕನ್ನಡ ಇಂಗ್ಲೀಷ್ ಭಾಷಾಸಾಹಿತ್ಯಗಳ ವಿಪುಲ ವ್ಯಾಸಂಗದ ಜೊತೆಗೆ ತೆಲುಗು ಬಂಗಾಳಿ ಭಾಷೆಗಳ ಚೆನ್ನಾದ ಪರಿಚಯವೂ ತಮಿಳು ಸಂಸ್ಕೃತಗಳ ತಕ್ಕಮಟ್ಟಿನ ಪರಿಚಯವೂ ಇದ್ದುವು.

ಸಾಹಿತಿಗಳಾಗಿ ಅವರು ಹೆಚ್ಚು ಬರವಣಿಗೆ ಬಿಡಲಿಲ್ಲ. ಅವರ ಉದ್ಯೋಗವೆಲ್ಲಾ ಸತ್ಸಂಗಕ್ಕೂ, ಪಾಠಪ್ರವಚನಗಳಿಗೂ, ಕನ್ನಡದ ಕೆಲಸಕ್ಕೂ ವಿನಿಯೋಗವಾಗಿತ್ತು. ಹೆಚ್ಚು ಮಾತು, ಹೆಚ್ಚು ಬರಹ ಅವರಿಗೆ ಸೇರದು. ಪರಿಶೋಧನೆಯಲ್ಲಿ ಅವರು ಒಳ್ಳೆಯ ಪ್ರಮುಖತೆಯ ಪ್ರಶ್ನೆಗಳನ್ನೆತ್ತಿ ವಿಚಾರ ಮಾಡುತ್ತಿದ್ದರು. ಅವರ ಈ ಬಗೆಯ ಪ್ರಾಸ್ತಾವಿಕ ಲೇಖನಗಳು ಕೆಲವೇ ಇದ್ದರೂ, ಅವರ ಆಧಾರಪೂರ್ವಕವಾದ ವಿಚಾರಸರಣಿಗೂ, ತೂಕದ ಶೈಲಿಗೂ ನಿದರ್ಶನವಾಗಿವೆ. ಕನ್ನಡದಲ್ಲಿ ಬೌದ್ಧ ಸಾಹಿತ್ಯವಿತ್ತೆ ? ನಿಜಾಂ ಕರ್ನಾಟಕದ ಸುರಪುರವೇ ಲಕ್ಷ್ಮೀಶನ ಊರೆ ? ಬಿಜ್ಜಳನು ಜೈನನೆ ? — ಈ ಬಗೆಯ ದೊಡ್ಡ ಬೇಟೆಯನ್ನೇ ಅವರು ಹೂಡುತ್ತಿದ್ದದ್ದು.

ಕನ್ನಡ ಸಾಹಿತ್ಯ ಚರಿತ್ರೆಯಮೇಲೆ "ಸಾಹಿತ್ಯ ಪರಿಷತ್ಪತ್ರಿಕೆ" ಗೆ ಕೆಲವು ಲೇಖನಗಳನ್ನೂ "ಪ್ರಬುದ್ಧ ಕರ್ಣಾಟಕ"ಕ್ಕೆ ಕೆಲವು ಲೇಖನಗಳನ್ನೂ ಬರೆದಿದ್ದಾರೆ. ಪಂಪ ಭಾರತ, ಹರಿಶ್ಚಂದ್ರ ಕಾವ್ಯ ಸಂಗ್ರಹ, ಕರ್ಣಾಟಕ ಕಾದಂಬರೀಸಂಗ್ರಹ, ಕನ್ನಡ ಕೈಪಿಡಿ, ಗದುಗಿನ ಭಾರತ— ಮುಂತಾದ ಶ್ರೇಷ್ಠ ತರಗತಿಯ ಗ್ರಂಥಗಳ ಪರಿಶೋಧನೆ ಮತ್ತು ಸಂಪಾದನೆಗಳಲ್ಲಿ ದುಡಿದಿರುತ್ತಾರೆ. ಬಸವರಾಜ ದೇವರ ರಗಳೆಯನ್ನು ಸಂಪಾದಿಸಿ ಪ್ರಕಟಿಸಿರುತ್ತಾರೆ. ಅವರ ಶಿಷ್ಯವರ್ಗದಲ್ಲಿ ಅನೇಕ ಮಂದಿ ವಿದ್ವಾಂಸರಾಗಿರುತ್ತಾರೆ. ಅವಸಾನಕಾಲದಲ್ಲಿ ಅವರಿಗೆ ಸುಮಾರು ೫೩ ವರ್ಷ ವಯಸ್ಸು!

ಸರಳ ಜೀವನ, ಪರಿಶುದ್ಧ ಚಾರಿತ್ರ—ಇವೇ ಅವರ ಮುಖ್ಯಗುಣಗಳು. ಅವರ ವಿದ್ಯಾರ್ಥಿಗಳಲ್ಲಿ ಅವರಿಗೆ ಅವ್ಯಾಜಪ್ರೇಮವಿತ್ತು. ನಾಲ್ಕು ವರ್ಷಕಾಲ ನಾನು ಮಹಾರಾಜಾ ಕಾಲೇಜಿನಲ್ಲಿ ಅವರ ಬಳಿ ವಿದ್ಯಾರ್ಜನೆ ಮಾಡುವ ಭಾಗ್ಯ ನನಗೆ ದೊರೆತಿದ್ದಿತು. ನನ್ನ ವ್ಯಾಸಂಗ ಕಾಲದಲ್ಲಿ ಅವರು ನನಗೆ ಮಾಡಿದ ಸಹಾಯಗಳನ್ನೂ, ಒದಗಿಸಿದ ಸೌಕರ್ಯಗಳನ್ನೂ ಅಷ್ಟಿಷ್ಟೆಂದು ಹೇಳಲಾರೆ. ಆ ಮಹನೀಯರಿಗೆ ನಾನು ಚಿರ ಋಣಿ!

—ಶ್ರೀಶೈಲಂ

## ಈ ಲೇಖಕರು ಬರೆದಿರುವ ಪುಸ್ತಕಗಳು



೧. ಮುದ್ದು ಕನ್ನಡ ನಾಡು (ಪದ್ಯ)

೨. ಮೈಸೂರು ಒಡೆಯರ ಕಥೆಗಳು

೩. ಮುಮ್ಮಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರು

೪. ದವನ (ಕವನ ಸಂಗ್ರಹ)

೫. ಜಂಗಮ – ವಿಜಯ (ಏಕಾಂಕ ನಾಟಕ)

೬. ಸ್ವಾಮಿ ರಾಮತೀರ್ಥರು

೭. ಶ್ರೀ ವಿದ್ಯಾರಣ್ಯರು

೮. ಆತ್ಮಜ್ಞಾನಿ ಅಲ್ಲಮಪ್ರಭು

೯. ಮಾಂಗಲ್ಯ (ಕವನಗಳು)

ಓ. ಎಣ್. ಲಿಂಗಣ್ಣಯ್ಯ, ಬಿ.ಎ., (ಆನರ್ಸ್)
ನಂ. ೨೦೬
ಚಿಕ್ಕಣ್ಣನ ತೋಟ
ಶಂಕರಪುರಂ, ಬಸವನಗುಡಿ ಅಂಚೆ
ಬೆಂಗಳೂರು.